# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಮರಿತಿಬ್ಬೇಗೌಡ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 302

ಉತ್ತರಿಸಬೇಕಾದ ದಿನಾಂಕ : 02.02.2021

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರ ರೈತರು ಸಹಕಾರ ಸಂಘಗಳಿಂದ ಪಡೆದ ಸಾಲವನ್ನು ಮನ್ನಾ ಮಾಡಲಾಗಿದೆಯೇ: | ಹೌದು. |
| ಆ) | ರೈತರ ಸಾಲ ಮನ್ನಾ ಯೋಜನೆಯ ಮಾನದಂಡಗಳೇನು: (ವಿವರ ನೀಡುವುದು) | ರೈತರ ಸಾಲ ಮನ್ನಾ ಯೋಜನೆಯ ಮಾನದಂಡಗಳು ಈ ಕೆಳಗಿನಂತಿರುತ್ತವೆ.<br>**1.2007-08 ನೇ ಸಾಲಿನ ರೂ.25,000 ಗಳ ಸಾಲ ಮನ್ನಾ:**<br>ರೈತರು ಸಹಕಾರ ಸಂಘಗಳಲ್ಲಿ ದಿನಾಂಕ 01.01.2006 ರಿಂದ 31.12.2006 ರವರೆಗೆ ಸಾಲ ಪಡೆದು ರೂ.25,000/- ಅಸಲು ಮತ್ತು ಅದರ ಮೇಲಿನ ಬಡ್ಡಿಯನ್ನು ಮನ್ನಾ ಮಾಡಲಾಗಿತ್ತು. ರೂ.25,000/-ಗಳಿಗಿಂತ ಹೆಚ್ಚಿನ ಅಸಲು ಮತ್ತು ಅದಕ್ಕೆ ತಗುಲುವ ಬಡ್ಡಿಯನ್ನು ದಿನಾಂಕ 30.04.2007 ರೊಳಗೆ ಮರುಪಾವತಿಸಬೇಕಿತ್ತು.<br>**2.2012 ನೇ ಸಾಲಿನ ರೂ.25,000 ಗಳ ಸಾಲ ಮನ್ನಾ ಯೋಜನೆ:**<br>ರೈತರು ಕೃಷಿ ಪತ್ತಿನ ಸಹಕಾರ ಸಂಘಗಳಿಂದ /ಬ್ಯಾಂಕುಗಳಿಂದ ದಿನಾಂಕ 1.8.2011 ರಿಂದ 25.7.2012 ರವರೆಗೆ ಪಡೆದು ದಿನಾಂಕ 25.7.2012 ಕ್ಕೆ ಹೊರಬಾಕಿ ಇರುವ ಅಲ್ಪಾವಧಿ ಬೆಳೆ ಸಾಲದಲ್ಲಿ ರೂ.25,000/ ಗಳವರೆಗೆ ಅಸಲು ಮತ್ತು ಅದಕ್ಕೆ ತಗಲುವ ಬಡ್ಡಿಯೊಂದಿಗೆ ಮನ್ನಾ ಮಾಡಲಾಗಿದೆ. ಈ ಯೋಜನೆಯಲ್ಲಿ ದಿ.25000 ಕ್ಕಿಂತ ಹೆಚ್ಚಿನ ಅಸಲು ಮತ್ತು ಅದಕ್ಕೆ ತಗುಲುವ ಬಡ್ಡಿಯನ್ನು ದಿ.30-6-2013 ಅಥವಾ ಗಡುವು ದಿನಾಂಕದೊಳಗೆ ಮರುಪಾವತಿಸಬೇಕಿತ್ತು.<br>**3. 2017 ನೇ ಸಾಲಿನ ರೂ.50,000 ಗಳ ಸಾಲ ಮನ್ನಾ ಯೋಜನೆ:.**<br>ರೈತರು ಕೃಷಿ ಪತ್ತಿನ ಸಹಕಾರ ಸಂಘಗಳಿಂದ /ಬ್ಯಾಂಕುಗಳಿಂದ ಅಲ್ಪಾವಧಿ ಬೆಳೆ ಸಾಲ ಪಡೆದು ದಿ.20-6-2017 ಕ್ಕೆ ಇರುವ ಹೊರಬಾಕಿಯಲ್ಲಿ ಗರಿಷ್ಟ ರೂ.50000 ಗಳವರೆಗಿನ ಅಸಲು ಮತ್ತು ಬಡ್ಡಿಯನ್ನು ಮನ್ನಾ ಮಾಡಲಾಗಿತ್ತು. ರೂ.50000 ಕ್ಕಿಂತ ಹೆಚ್ಚಿನ ಅಸಲು ಮತ್ತು ಬಡ್ಡಿಯನ್ನು ಗಡುವು ದಿನಾಂಕ ಅಥವಾ ದಿ.20-6-2018 ರೊಳಗೆ ಮರುಪಾವತಿಸಬೇಕಿತ್ತು. ರೈತರು ಎರಡು ಸಹಕಾರ ಸಂಘಗಳಲ್ಲಿ ಸಾಲ ಪಡೆದಿದ್ದಲ್ಲಿ ಒಂದು ಸಹಕಾರ ಸಂಘದಲ್ಲಿ ಮಾತ್ರ ಸಾಲ ಮನ್ನಾ ಸೌಲಭ್ಯ ನೀಡಲಾಗಿತ್ತು. |

| | | |
|---|---|---|
| | | **4. 2018 ನೇ ಸಾಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆ .**<br>ರೈತರು ಕೃಷಿ ಪತ್ತಿನ ಸಹಕಾರ ಸಂಘಗಳಿಂದ /ಬ್ಯಾಂಕುಗಳಿಂದ ಅಲ್ಪಾವಧಿ ಬೆಳೆ ಸಾಲ ಪಡೆದು ದಿ.10-7-2018 ಕ್ಕೆ ಇರುವ ಹೊರಬಾಕಿಯಲ್ಲಿ ಕುಟುಂಬಕ್ಕೆ ಗರಿಷ್ಠ ರೂ. 1.00 ಲಕ್ಷಗಳ ವರೆಗಿನ ಅಸಲನ್ನು ಮನ್ನಾ ಮಾಡಲಾಗಿತ್ತು. ರೂ.1.00 ಲಕ್ಷಗಳಿಗಿಂತ ಹೆಚ್ಚಿನ ಅಸಲು ಮತ್ತು ಸುಸ್ತಿ ಬಡ್ಡಿಯನ್ನು ದಿ:31.7.2019 ರೊಳಗೆ ಮರುಪಾವತಿಸಬೇಕಿತ್ತು. ಈ ಯೋಜನೆ ರೂ.20,000 ಹೆಚ್ಚಿನ ವೇತನ/ಪಿಂಚಣಿ ಪಡೆಯುವ ನೌಕರರಿಗೆ ಮತ್ತು ಕಳೆದ ಮೂರು ವರ್ಷಗಳಲ್ಲಿ ಯಾವುದಾದರೂ ಒಂದು ವರ್ಷದಲ್ಲಿ ಆದಾಯ ತೆರಿಗೆ ಪಾವತಿಸಿದಲ್ಲಿ ಅಂತಹ ರೈತರಿಗೆ ಅನ್ವಯವಾಗುವುದಿಲ್ಲ. ರೈತರು ಎರಡು ಸಹಕಾರ ಸಂಘಗಳಲ್ಲಿ ಸಾಲ ಪಡೆದಿದ್ದಲ್ಲಿ ಒಂದು ಸಹಕಾರ ಸಂಘದಲ್ಲಿ ಮಾತ್ರ ಸಾಲ ಮನ್ನಾ ಪಡೆಯಬಹುದಾಗಿತ್ತು. |
| ಇ) | ಯಾವ ಯಾವ ಸಹಕಾರಿ ಸಂಘ ಹಾಗೂ ಬ್ಯಾಂಕ್‌ಗಳಿಂದ ಪಡೆದ ಸಾಲವನ್ನು ಮನ್ನಾ ಮಾಡಲಾಗಿದೆ; | ರೈತರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಪಿಕಾರ್ಡ್ ಬ್ಯಾಂಕ್, ಲ್ಯಾಂಪ್ಸ್ ಹಾಗೂ ಜಿಲ್ಲಾ ಸಹಕಾರ ಕೇಂದ್ರ ಸಹಕಾರ ಬ್ಯಾಂಕ್‌ಗಳಲ್ಲಿ ಪಡೆದ ಬೆಳೆ ಸಾಲವನ್ನು ಮನ್ನಾ ಮಾಡಲಾಗಿದೆ. |
| ಈ) | ತಲಾ ಎಷ್ಟು ಮೊತ್ತದ, ಯಾವ ಅವಧಿಯ ಯಾವ ಸಾಲವನ್ನು ಮನ್ನಾ ಮಾಡಲಾಗಿದೆ; (ಪೂರ್ಣ ವಿವರ ನೀಡುವುದು) | ವಿವಿಧ ಅವಧಿಯ ಸಾಲ ಮನ್ನಾ ಮಾಡಲಾದ ವಿವರ ಈ ಕೆಳಗಿನಂತಿರುತ್ತದೆ.<br>**2007-08 ನೇ ಸಾಲಿನ ರೂ.25,000/-ಗಳ ಸಾಲ ಮನ್ನಾ**<br>1. ರೈತರು ಸಹಕಾರ ಸಂಘಗಳಲ್ಲಿ ದಿನಾಂಕ 01.01.2006 ರಿಂದ 31.12.2006 ರವರೆಗೆ ಸಾಲ ಪಡೆದು ಪ್ರತೀ ರೈತರಿಗೆ ರೂ.25,000/- ಸಾವಿರ ಅಸಲು ಮತ್ತು ಅದರ ಮೇಲಿನ ಬಡ್ಡಿಯನ್ನು ಸಾಲ ಮನ್ನಾ ಮಾಡಲಾಗಿದೆ.<br>2. **2012 ನೇ ಸಾಲಿನ ರೂ.25,000/-ಗಳ ಸಾಲ ಮನ್ನಾ ಯೋಜನೆ:-**<br>ರೈತರು ಕೃಷಿ ಸಹಕಾರ ಸಂಘಗಳಿಂದ /ಬ್ಯಾಂಕುಗಳಿಂದ ದಿನಾಂಕ 1.8.2011 ರಿಂದ 25.7.2012 ರವರೆಗೆ ಪಡೆದು ದಿನಾಂಕ 25.7.2012 ಕ್ಕೆ ಬಾಕಿ ಇರುವ ಅಲ್ಪಾವಧಿ ಬೆಳೆ ಸಾಲದಲ್ಲಿ ಪ್ರತೀ ರೈತರಿಗೆ ರೂ.25,000/ -ಗಳವರೆಗೆ ಅಸಲು ಮತ್ತು ಅದಕ್ಕೆ ತಗಲುವ ಬಡ್ಡಿಯೊಂದಿಗೆ ಮನ್ನಾ ಮಾಡಲಾಗಿದೆ.<br>3. **2017 ನೇ ಸಾಲಿನ ರೂ.50,000/-ಗಳ ಸಾಲ ಮನ್ನಾ ಯೋಜನೆ:-**<br>ರೈತರು ಕೃಷಿ ಸಹಕಾರ ಸಂಘಗಳಿಂದ/ಬ್ಯಾಂಕುಗಳಿಂದ ಅಲ್ಪಾವಧಿ ಬೆಳೆ ಸಾಲ ಪಡೆದು ದಿ:20.06.2017 ಕ್ಕೆ ಇರುವ ಹೊರಬಾಕಿಯಲ್ಲಿ ಪ್ರತೀ ರೈತರಿಗೆ ಗರಿಷ್ಠ ರೂ.50,000/-ಗಳವರೆಗಿನ ಅಸಲು ಮತ್ತು ಬಡ್ಡಿಯನ್ನು ಮನ್ನಾ ಮಾಡಲಾಗಿತ್ತು. ರೈತರು ಎರಡು ಸಹಕಾರ ಸಂಘಗಳಲ್ಲಿ ಸಾಲ ಪಡೆದಿದ್ದಲ್ಲಿ ಒಂದು ಸಹಕಾರ ಸಂಘದಲ್ಲಿ ಮಾತ್ರ ಸಾಲ ಮನ್ನಾ ಮಾಡಲಾಗಿತ್ತು.<br>**4. 2018 ನೇ ಸಾಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆ:-.**<br>ರೈತರು ಕೃಷಿ ಪತ್ತಿನ ಸಹಕಾರ ಸಂಘಗಳಿಂದ / ಬ್ಯಾಂಕುಗಳಿಂದ ಅಲ್ಪಾವಧಿ ಬೆಳೆ ಸಾಲ ಪಡೆದು ದಿ.10-7-2018 ಕ್ಕೆ ಇರುವ ಹೊರಬಾಕಿಯಲ್ಲಿ ಪ್ರತೀ ಕುಟುಂಬಕ್ಕೆ ಗರಿಷ್ಠ ರೂ. 1.00 ಲಕ್ಷಗಳವರೆಗಿನ ಅಸಲನ್ನು ಮನ್ನಾ ಮಾಡಲಾಗಿತ್ತು. ರೈತರು ಎರಡು ಸಹಕಾರ ಸಂಘಗಳಲ್ಲಿ ಸಾಲ ಪಡೆದಿದ್ದಲ್ಲಿ ಒಂದು ಸಹಕಾರ ಸಂಘದಲ್ಲಿ ಮಾತ್ರ ಸಾಲ ಮನ್ನಾ ಮಾಡಲಾಗಿತ್ತು. |

| | | |
|---|---|---|
| ಉ) | ಸದರಿ ಯೋಜನೆ ಫಲಾನುಭವಿಗಳ ಒಟ್ಟು ಸಂಖ್ಯೆ ಹಾಗೂ ಒಟ್ಟು ಎಷ್ಟು ಮೊತ್ತದ ಸಾಲ ಮನ್ನಾ ಮಾಡಲಾಗಿದೆ? | ಸದರಿ ಯೋಜನೆಯಲ್ಲಿ ಫಲಾನುಭವಿಗಳ ವಿವರ ಈ ಕೆಳಗಿನಂತಿರುತ್ತದೆ. (ರೂ.ಕೋಟಿಗಳಲ್ಲಿ) |

| ಕ್ರ ಸಂ. | ಸಾಲ ಮನ್ನಾ ಅವಧಿ | ಫಲಾನುಭವಿಗಳ ಸಂಖ್ಯೆ | ಸಾಲ ಮನ್ನಾ ಮೊತ್ತ |
|---|---|---|---|
| 1 | 2007–08ನೇ ಸಾಲಿನ ರೂ.25,000/-ಗಳ ಸಾಲ ಮನ್ನಾ | 12,25,799 | 1878.25 |
| 2 | 2012ನೇ ಸಾಲಿನ ರೂ.25,000/–ಗಳ ಸಾಲ ಮನ್ನಾ ಯೋಜನೆ | 14,74,000 | 3299.20 |
| 3 | 2017ನೇ ಸಾಲಿನ ರೂ.50,000/–ಗಳ ಸಾಲ ಮನ್ನಾ ಯೋಜನೆ | 21,03,000 | 7631.01 |
| 4 | 2018ನೇ ಸಾಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆ | 17,06,049 | 7987.47 |

**ಸಂಖ್ಯೆ: ಸಿಒ 21 ಸಿಎಲ್ಎಸ್ 2021**

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು